ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ರಾಜ್ಯದ ಕಬ್ಬು ಬೆಳೆಗಾರರ ಸಮಸ್ಯೆ ಕುರಿತು

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

41 (139) ಮಾನ್ಯ ಕಾರ್ಮಿಕ ಹಾಗೂ ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕಬ್ಬು ಬೆಳೆಗಾರರ ಹಿತ ಕಾಪಾಡಲು ರಚಿಸಲಾಗಿರುವ ಸಕ್ಕರೆ ಹಾಗೂ ಕಬ್ಬು ನಿರ್ದೇಶನಾಲಯವು ರೈತರ ಬಗ್ಗೆ ಕಾಳಜಿ ವಹಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ರಾಜ್ಯದಲ್ಲಿನ ಅತಿವೃಷ್ಟಿ-ಅನಾವೃಷ್ಟಿಯ ಸಮಸ್ಯೆಗಳ ನಡುವೆ ರೈತರು ತಾವು ಬೆಳೆದು ಮಾರಾಟ ಮಾಡಿದ ಕಬ್ಬಿನ ಹಣ ಸಕಾಲದಲ್ಲಿ ಕೈಗೆ ಸಿಗದೇ ತತ್ತರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಸರ್ಕಾರ ಕೊಟ್ಟ ಭರವಸೆ ಈಡೇರದೇ ವಿಫಲವಾಗಿದ್ದು ಬಾಕಿ ಮೊತ್ತ ಪಾವತಿ ಮಾಡಲಾಗದ ಕಾರ್ಖಾನೆಗಳ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಈ) ಕಬ್ಬು ಪೂರೈಸಿದ 15 ದಿನಗಳಲ್ಲಿ ಹಣ ಪಾವತಿ ಮಾಡಬೇಕೆಂಬ ನಿಯಮವಿದ್ದರೂ ರೈತರ ಕೈಗೆ ಹಣ ಸಿಗದಿರುವುದರ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು?